# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 1401 |
| ಸದಸ್ಯರ ಹೆಸರು: | ಶ್ರೀಮತಿ ವೀಣಾ ಅಚ್ಚಯ್ಯ. |
| ಉತ್ತರಿಸುವ ದಿನಾಂಕ: | 09.03.2022 |
| ಉತ್ತರಿಸುವವರು | ಮುಜರಾಯಿ, ಹಜ್ ಹಾಗೂ ವಕ್ಫ್ ಸಚಿವರು |

| | ಪ್ರಶ್ನೆ | ಉತ್ತರ |
|---|---|---|
| ಅ) | ಕೊಡಗಿನ ಪುಣ್ಯ ಕ್ಷೇತ್ರಗಳಾದ ತಲಕಾವೇರಿ ಹಾಗೂ ಭಾಗಮಂಡಲ ದೇವಸ್ಥಾನಗಳಲ್ಲಿ ಮೂಲಭೂತ ಸೌಕರ್ಯ ಹಾಗೂ ಅಭಿವೃದ್ಧಿ ಕಾರ್ಯಗಳಿಗೆ ಅನುದಾನದ ಕೊರತೆಯಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಬಂದಿದೆ |
| ಆ) | ಬಂದಿದ್ದಲ್ಲಿ, ಪ್ರಸ್ತುತ ಆರ್ಥಿಕ ವರ್ಷದಲ್ಲಿ ಸದರಿ ದೇವಸ್ಥಾನಗಳಿಗೆ ಸರ್ಕಾರದಿಂದ ಬಿಡುಗಡೆಯಾದ ಅನುದಾನವೆಷ್ಟು ಹಾಗೂ ಕೈಗೊಂಡಿರುವ ಮೂಲಭೂತ ಸೌಕರ್ಯ ಹಾಗೂ ಅಭಿವೃದ್ಧಿ ಕಾರ್ಯಗಳು ಯಾವುವು? | 2021-22ನೇ ಸಾಲಿನಲ್ಲಿ ತುಲಾ ಸಂಕ್ರಮಣ /ತೀರ್ಥೋದ್ಭವ ಜಾತ್ರೆಗೆ ಸಾಮಾನ್ಯ ಸಂಗ್ರಹಣಾ ನಿಧಿಯಿಂದ **ರೂ.20,00,014.16/-ಗಳ** ಅನುದಾನ ಬಿಡುಗಡೆಯಾಗಿರುತ್ತದೆ. ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯಿಂದ 2020-21ನೇ ಸಾಲಿನಲ್ಲಿ ದಿ:23.05.2020 ರಲ್ಲಿ ರೂ.100.00/- ಲಕ್ಷಗಳ ಅನುದಾನ ಬಿಡುಗಡೆಯಾಗಿರುತ್ತದೆ. ಈ ಅನುದಾನದಿಂದ ಕಾಮಗಾರಿ ಕೈಗೊಳ್ಳುವ ಕುರಿತು ಜಿಲ್ಲಾಧಿಕಾರಿಗಳು, ಕೊಡಗು ಜಿಲ್ಲೆ ರವರು ಸರ್ಕಾರದ ಪ್ರಧಾನ ಮುಖ್ಯ ವಾಸ್ತು ಶಿಲ್ಪಿ ರವರಿಗೆ ನೀಲಿ ನಕ್ಷೆ ತಯಾರಿಸಿಕೊಡಲು ಪತ್ರ ಬರೆಯಲಾಗಿದ್ದು, ಸದರಿ ನಕ್ಷೆ ಸ್ವೀಕೃತಗೊಂಡ ನಂತರ ಉದ್ದೇಶಿತ ವಸತಿ ಗೃಹ ಕಟ್ಟಡ ಕಾಮಗಾರಿಯನ್ನು ಕೈಗೊಳ್ಳಲಾಗುವುದು.<br><br>(ಕಾಮಗಾರಿಗಳ ವಿವರದ ಪಟ್ಟಿಯನ್ನು ಲಗತ್ತಿಸಿದೆ). |
| ಇ) | ಮುಂದಿನ ಆರ್ಥಿಕ ವರ್ಷದಲ್ಲಿಯಾದರೂ ಕೊಡಗಿನ ಪುಣ್ಯ ಕ್ಷೇತ್ರಗಳಾದ ತಲಕಾವೇರಿ ಹಾಗೂ ಭಾಗಮಂಡಲ ದೇವಸ್ಥಾನಗಳಿಗೆ ಮೂಲಭೂತ ಸೌಕರ್ಯ ಕಲ್ಪಿಸಲು ಹಾಗೂ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳಲು ಸಾಕಷ್ಟು ವಿಶೇಷ ಅನುದಾನವನ್ನು ಒದಗಿಸಲು ಸರ್ಕಾರ ಕ್ರಮವಹಿಸುವುದೇ? | ಕೊಡಗಿನ ಪುಣ್ಯ ಕ್ಷೇತ್ರಗಳಾದ ತಲಕಾವೇರಿ ಹಾಗೂ ಭಾಗಮಂಡಲ ದೇವಸ್ಥಾನಗಳಿಗೆ ಮೂಲಭೂತ ಸೌಕರ್ಯ ಕಲ್ಪಿಸಲು ಹಾಗೂ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳಲು ವಿಶೇಷ ಅನುದಾನವನ್ನು ಒದಗಿಸಲು ಕೋರಿ ಜಿಲ್ಲಾಧಿಕಾರಿಗಳು ಕೊಡಗು ಜಿಲ್ಲೆರವರಿಂದ ಪ್ರಸ್ತಾವನೆ ಸ್ವೀಕೃತವಾದಲ್ಲಿ ಅನುದಾನ ಮಂಜೂರಾತಿಗಾಗಿ ಕ್ರಮ ಕೈಗೊಳ್ಳಲಾಗುವುದು. |

ಸಂಖ್ಯೆ:ಕಂಇ 57 ಮಸಪು 2022

**(ಶಶಿಕಲಾ.ಅ.ಜೊಲ್ಲೆ)**
ಮುಜರಾಯಿ, ಹಜ್ ಹಾಗೂ ವಕ್ಫ್ ಸಚಿವರು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1401

**ಅನುಬಂಧ**

## ಕಾಮಗಾರಿಗಳ ವಿವರ

| ಕ್ರ.ಸಂ. | ಮುಕ್ತಾಯಗೊಂಡಿರುವ ಕಾಮಗಾರಿಗಳ ವಿವರ | ಆಡಳಿತಾತ್ಮಕ ಮಂಜೂರಾತಿ ಆದೇಶ/ಮಂಜೂರಾತಿಗೆ ಶಿಫಾರಸ್ಸು ಮಾಡಿರುವ ಪತ್ರ ಸಂಖ್ಯೆ ಮತ್ತು ದಿನಾಂಕ | ಆಡಳಿತಾತ್ಮಕ ಮಂಜೂರಾತಿಯಂತೆ ಕಾಮಗಾರಿ ಮೊತ್ತ ರೂ. | ಈಗಾಗಲೇ ಪಾವತಿಸಿರುವ ಮೊತ್ತ ರೂ. | ಪಾವತಿಸಲು ಬಾಕಿಯಿರುವ ಮೊತ್ತ ರೂ. |
|---|---|---|---|---|---|
| 1. | ಮುಕ್ತಾಯಗೊಂಡಿರುವ ಕಾಮಗಾರಿಗಳ ವಿವರ. | | | | |
| 1) | ಶ್ರೀ ಭಗಂಡೇಶ್ವರ ದೇವಸ್ಥಾನದ ಭಾಗ್ಯಪಟ್ಟ ತ್ರಿವೇಣಿ ಸಂಗಮದಲ್ಲಿ ತಡೆಗೋಡೆ ನಿರ್ಮಾಣ | ಅಪರ ಜಿಲ್ಲಾಧಿಕಾರಿಗಳು, ಕೊಡಗು ಜಿಲ್ಲೆ ಇವರ ಆದೇಶ ಸಂಖ್ಯೆ: ಮುಜರಾಯಿ 17/2019-20, ದಿ:25.07.2019. | 3000000.00 | 1500000.00 ಪಾವತಿಸಿರುವ ದಿ:01.10.2019 | 1500000.00 |
| 2) | ಶ್ರೀ ಭಗಂಡೇಶ್ವರ ದೇವಸ್ಥಾನಕ್ಕೆ ಸೇರಿದ ತ್ರಿವೇಣಿ ಸಂಗಮದ ನದಿಯ ದಡದಲ್ಲಿ ಮುಡಿ ಶೆಡ್ ಹಾಗೂ ಪಿಂಡ ಪ್ರಧಾನ ಕಾಮಗಾರಿ. | ಅಪರ ಜಿಲ್ಲಾಧಿಕಾರಿಗಳು, ಕೊಡಗು ಜಿಲ್ಲೆ ಇವರ ಆದೇಶ ಸಂಖ್ಯೆ: ಮುಜರಾಯಿ 18/2019-20, ದಿನಾಂಕ: 25.07.2019. | 2885000.00 | 1442500.00 ಪಾವತಿಸಿರುವ ದಿ:01.10.2019 | 1442500.00 |
| 3) | ಶ್ರೀ ಭಗಂಡೇಶ್ವರ ದೇವಸ್ಥಾನಕ್ಕೆ ಸೇರಿದ ತ್ರಿವೇಣಿ ಸಂಗಮದ ನದಿಯ ದಡದಲ್ಲಿ ನೂತನವಾಗಿ ನಿರ್ಮಾಣಗೊಂಡಿರುವ ಮುಡಿ ಶೆಡ್ ಹಾಗೂ ಪಿಂಡ ಪ್ರಧಾನ ಮುಂಭಾಗದ ಸ್ಥಳದಲ್ಲಿ ಉನ್ನತೀಕರಣ ಕಾಮಗಾರಿ | ಈ ಕಛೇರಿಯ ಪತ್ರ ಸಂಖ್ಯೆ: ಎಸ್‌ಬಿಟಿ/ಸಿಆರ್ 11/2020-21, ದಿನಾಂಕ: 12.10.2020. | 1350000.00 | 0 | 1350000.00 |
| 4) | ಶ್ರೀ ಭಗಂಡೇಶ್ವರ ದೇವಸ್ಥಾನಕ್ಕೆ ಸೇರಿದ ತ್ರಿವೇಣಿ ಸಂಗಮದ ನದಿಯ ದಡದಲ್ಲಿ ಕ್ರಮ ಸಂಖ್ಯೆ (1) ರ ಕಾಮಗಾರಿ ನಿರ್ವಹಿಸುವ ಸಂದರ್ಭದಲ್ಲಿ ಅನುಮೋದನೆಯಾದ ಅಂದಾಜು ಪಟ್ಟಿಯಲ್ಲಿನ ಪ್ರಮಾಣಕ್ಕಿಂತ ಹೆಚ್ಚುವರಿಯಾಗಿ 2 ಅಡಿ ಎತ್ತರದ ಹೆಚ್ಚಿಸಿರುವ ಕಾಮಗಾರಿ ರೂ. 4.00 ಲಕ್ಷ ಹಾಗೂ ತಡೆಗೋಡೆಗೆ ರೇಲಿಂಗ್ಸ್ ಕಾಮಗಾರಿ ಅಳವಡಿಸಿರುವುದಕ್ಕೆ ರೂ. 1.95 ಲಕ್ಷ ಒಟ್ಟು ರೂ. 5.95 ಲಕ್ಷಗಳು. | ಈ ಕಛೇರಿಯ ಪತ್ರ ಸಂಖ್ಯೆ: ಎಸ್‌ಬಿಟಿ/ಸಿಆರ್ 12/2020-21, ದಿನಾಂಕ: 12.10.2020. | 595000.00 | 0 | 595000.00 |
| | | ಒಟ್ಟು | 78,30,000.00 | 29,42,500.00 | 48,87,500.00 |
| 2. | ಪ್ರಗತಿಯಲ್ಲಿರುವ ಕಾಮಗಾರಿಗಳ ವಿವರ. | | | | |
| 5) | ಶ್ರೀ ಭಗಂಡೇಶ್ವರ ದೇವಸ್ಥಾನದ ತಾಮ್ರದ ಮೇಲ್ಛಾವಣಿ. | ಅಪರ ಜಿಲ್ಲಾಧಿಕಾರಿಗಳು, ಕೊಡಗು ಜಿಲ್ಲೆ ಇವರ ಆದೇಶ ಸಂಖ್ಯೆ: ಮುಜರಾಯಿ 19/2019-20, ದಿ: 25.07.2019. | 48,55,000.00 | 24,27,500.00 ದಿ:01.10.2019 | 24,27,500.00 |
| 6) | 2019 ರ ತುಲಾ ಸಂಕ್ರಮಣ ಸಂದರ್ಭದಲ್ಲಿ ಶ್ರೀ ಭಗಂಡೇಶ್ವರ – ತಲಕಾವೇರಿ ದೇವಾಲಯದಲ್ಲಿ ಸಾರ್ವಜನಿಕ ಭಕ್ತಾದಿಗಳ ಹಿತದೃಷ್ಟಿಯಿಂದ ಸಿಸಿಟಿವಿ ಅಳವಡಿಕೆ ಕಾಮಗಾರಿ. | ಈ ಕಛೇರಿಯ ಪತ್ರ ಸಂಖ್ಯೆ: ಎಸ್‌ಬಿಟಿ/ಸಿಆರ್ 10/2019-20, ದಿನಾಂಕ: 28.12.2020. | 11,12,000.00 | – | 11,12,000.00 |
| | | ಒಟ್ಟು | 59,67,000.00 | 24,27,500.00 | 35,39,500.00 |

### ಘೋಷ್ವಾರೆ

| ಕ್ರ.ಸಂ. | ಕಾಮಗಾರಿ ವಿವರ | ಕಾಮಗಾರಿಯ ಅಂದಾಜು ಮೊತ್ತ | ಕಾಮಗಾರಿಗೆ ಪಾವತಿಸಿರುವ ಮೊತ್ತ | ಕಾಮಗಾರಿಗೆ ಪಾವತಿಸಲು ಬಾಕಿಇರುವ ಮೊತ್ತ |
|---|---|---|---|---|
| 1. | ಮುಕ್ತಾಯಗೊಂಡಿರುವ ಕಾಮಗಾರಿಗಳ ವಿವರ. | 78,30,000.00 | 29,42,500.00 | 48,87,500.00 |
| 2. | ಪ್ರಗತಿಯಲ್ಲಿರುವ ಕಾಮಗಾರಿಗಳ ವಿವರ. | 59,67,000.00 | 24,27,500.00 | 35,39,500.00 |
| | ಒಟ್ಟು | 1,37,97,000.00 | 53,70,000.00 | 84,27,000.00 |